ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು

# ಇತಿಹಾಸ ಅಧ್ಯಯನ : ಅಂದು-ಇಂದು*

ಒಬ್ಬ ಘನ ವಿದ್ವಾಂಸನ 'ಹಿಸ್ಟ್ರಿ ಮೇಕ್ಸ್ ಮೆನ್ ವೈಜ್' ಎಂಬ ಸುಭಾಷಿತವು ಪ್ರಸಿದ್ಧ. ಇದು ಒಂದು ಜನಾಂಗದ, ದೇಶದ-ಒಟ್ಟಾರೆ ಮಾನವನ ಏಳಿಗೆಗೆ ಇತಿಹಾಸ ಅಧ್ಯಯನದ ಮಹತ್ವವನ್ನು ಸೂಚಿಸುತ್ತದೆ. ಕೇವಲ ಅವನ ನಿತ್ಯಜೀವನದ ಕ್ರಮ ರೀತಿನೀತಿಗಳನ್ನು ಹೇಳುವುದಲ್ಲದೆ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಕಾಲಕಾಲಕ್ಕೂ ಮಾನವನು ತನ್ನ ಹಿಂದಿನ ಪೀಳಿಗೆಯವರ ಅನುಭವ ಪರಂಪರೆಯ ಹಿನ್ನೆಲೆಯಲ್ಲಿ ಹಾಗೂ ತಾನು ಇರುವ ಪರಿಸರಕ್ಕನುಗುಣವಾಗಿ ಮತ್ತು ಇತರ ಭಿನ್ನ ಭಿನ್ನ ಜನರ ಸಂಪರ್ಕದ ಪ್ರಭಾವದಿಂದ (ಅವನು ಸೇರಿದಂತೆ) ವಾಸ್ತವಿಕ ಜೀವನದ ಸುಧಾರಣೆ ; ಅಗಾಧ ಹಾಗೂ ನಿಗೂಢವಾದ ವಿಶ್ವದ ರಹಸ್ಯವನ್ನು ತತ್ವವನ್ನು ತಿಳಿದುಕೊಳ್ಳುವ ನಾನಾ ಪ್ರಕಾರದ ಪ್ರಯತ್ನಗಳು ; ಇಂಥ ಪ್ರಯತ್ನಗಳಲ್ಲಿ ಅವನ ಸೋಲು–ಗೆಲುವು, ಗುಣ-ದೋಷಗಳು ಮೊದಲಾದ ವಿಷಯಗಳ ಆಧಾರಬದ್ಧವಾದ ಸಮಗ್ರ ಅಧ್ಯಯನದ ನಿರೂಪಣೆಯೆ ಇತಿಹಾಸ. ಈ ರೀತಿಯ ನಿರೂಪಣೆಗೆ ಈಚೀನ ಕಾಲದಲ್ಲಿ ಹಲವಾರು ವೈಜ್ಞಾನಿಕ ವಿಧಾನಗಳನ್ನು, ಸಾಧನೆಗಳನ್ನು ಬಳಸಲಾಗುತ್ತಿದೆ.

ಇಷ್ಟು ವ್ಯಾಪಕವಾದ ಅರ್ಥವಿಲ್ಲದಿದ್ದರೂ ಇತಿಹಾಸದ ಮಹತ್ವವನ್ನು ತಿಳಿದು ತಮ್ಮ ತಮ್ಮ ಪರಂಪರೆಗನುಗುಣವಾಗಿ ಉದ್ದೇಶಗಳನ್ನಿಟ್ಟುಕೊಂಡು ತಮ್ಮ ತಮ್ಮ ದೇಶ/ಪ್ರದೇಶದ ಇತಿಹಾಸವನ್ನು ಹೇಳುವ/ಬರೆದಿಡುವ ಪ್ರಯತ್ನ ಮಾತ್ರ ಬಹಳ ಪ್ರಾಚೀನ ಕಾಲದಿಂದಲೂ ಇದೆ. ಗ್ರೀಕರಲ್ಲಿ ಹೆರೊಡೋಟಸನನ್ನು 'ಇತಿಹಾಸದ ಪಿತಾಮಹ'ನೆಂದು ವಿದ್ವಾಂಸರು ಗುರುತಿಸುತ್ತಾರೆ. ಪ್ರಾಚೀನ ಚೈನಾ ದೇಶದ ಕ್ರಿ. ಪೂ. ೩ನೇ ಶತಮಾನದಿಂದಲೂ ಅದರ ಕಾಲಾನುಕ್ರಮದ ಮುಖ್ಯ ಘಟನೆಗಳ ನಿರೂಪಣೆಯ ಗ್ರಂಥಗಳಿವೆ. ಈಚೀನ ಕಾಲದಲ್ಲಿ ಇತಿಹಾಸಪ್ರಜ್ಞೆಯಿಲ್ಲದ ದೇಶವೆಂದು ದೂಷಿಸಲ್ಪಟ್ಟ ನಮ್ಮ ದೇಶದಲ್ಲೂ ದೊಡ್ಡ ಪ್ರಮಾಣದಲ್ಲಿಯೇ ಇಂಥ ಪ್ರಯತ್ನವು ಹಿಂದಿನ ಕಾಲದಿಂದಲೂ ನಡೆದಿದೆ. ಮಾನವನ ಏಳಿಗೆಗೆ ನಿತ್ಯನೂತನ ಹಾಗೂ ಸತ್ಯವಾದ ಜೀವನಮೌಲ್ಯಗಳು ಯಾವುವು ? ಅವುಗಳನ್ನು ಏಕೆ ಪರಿಪಾಲಿಸಬೇಕು ? ಎಂಬಿವೆ ಮೊದಲಾದ ಮೂಲಭೂತ ವಿಷಯಗಳನ್ನು ಪ್ರತಿಪಾದನೆ ಮಾಡುವುದ ಕ್ಕೋಸ್ಕರ ಸಮಾಜದಲ್ಲಿ ಆಗಿಹೋದ ವಿವಿಧ ಸತ್ಯಘಟನೆಗಳನ್ನು ಕಾವ್ಯರೂಪದಲ್ಲಿ ಮನಮುಟ್ಟುವಂತೆ ನಿರೂಪಿಸುವ ರಾಮಾಯಣ ಮತ್ತು ಮಹಾಭಾರತವೂ ಕೂಡ ಐತಿಹಾಸಿಕ ಮಹತ್ವವುಳ್ಳದ್ದು. ಪುರಾಣಗಳಂತೂ ಬಹುಮಟ್ಟಿಗೆ ಇತಿಹಾಸವೆಂದು ಹೇಳಲಾಗಿದೆ. ಇವುಗಳಲ್ಲಿ ವಿಶ್ವಸೃಷ್ಟಿಯ ಆದಿಯಿಂದ ಹಿಡಿದು, ಮುಖ್ಯವಾಗಿ ಮನುವಿನಿಂದ ಅದರಲ್ಲೂ ಹೆಚ್ಚು ಸ್ಪಷ್ಟವಾಗಿ ಮಹಾಭಾರತದ ಪಾಂಡವ ಅರ್ಜುನನ ಮೊಮ್ಮಗ ಪರಿಕ್ಷಿತನ ಕಾಲದಿಂದ ಗುಪ್ತರ ಕಾಲದವರೆಗಿನ ಇತಿಹಾಸವು ಇವುಗಳಲ್ಲಿ ಅಡಕವಾಗಿದೆ.

---

* ಆಶೀರ್ವಚನ

ಸರ್ಗಶ್ಚ ಪ್ರತಿಸರ್ಗಸ್ಚ ವಂಶೋ ಮನ್ವಂತ
ರಾಣಿ ಚ
ವಂಶಾನುಚರಿತಂ ಚೇತಿ ಪುರಾಣಂ ಪಂಚ
ಲಕ್ಷಣಂ

ಹಿಂದೆ ಆಗಿಹೋದ ವಿಷಯಗಳನ್ನು ಏಕೆ ನೆನಪಿಡ ಬೇಕು ? ಅದರಿಂದ ನಮಗೇನು ಉಪಯೋಗ ? ಇದಕ್ಕೆ ಉತ್ತರ ರೂಪವಾಗಿ ನಮ್ಮ ಹಿಂದಿನವರು ಹೀಗೆ ಹೇಳಿ ದ್ದಾರೆ:

ಧರ್ಮಾರ್ಥ ಕಾಮ ಮೋಕ್ಷಾಣಾಂ ಉಪದೇಶಂ
ಸಮನ್ವಿತಂ
ಪೂರ್ವವೃತ್ತಂಕಥಾಯುಕ್ತಂ ಇತಿಹಾಸಂ
ಪ್ರಚಕ್ಷತೆ

ಆದ್ದರಿಂದ ನಮ್ಮ ಪ್ರಾಚೀನ ಜನರು ಇತಿಹಾಸದ ಅವಶ್ಯ ಕತೆ ಮತ್ತು ಮಹತ್ವವನ್ನು ಅರಿತಿದ್ದರು. ಇದರ ಉದ್ದೇಶ ಕೇವಲ ಪಂಡಿತರ ಅಧ್ಯಯನದ ವಸ್ತುವಾಗು ವುದಕ್ಕೆ ಅಥವಾ ಮಾನವನ ಕುತೂಹಲವನ್ನು ಉತ್ತರಿಸು ವುದಕ್ಕಲ್ಲ. ಮುಖ್ಯವಾಗಿ ಮನುಷ್ಯನು ಸನ್ಮಾರ್ಗದಲ್ಲಿ ನಡೆಯುವುದಕ್ಕೆ ಬೇಕಾದ ವಿವೇಕವನ್ನು ಪಡೆಯುವುದ ಕ್ಕೋಸ್ಕರ. ಇಷ್ಟೆ ಅಲ್ಲ, ಇತಿಹಾಸವನ್ನು ಬರೆಯ ಬೇಕಾದರೆ ಎಷ್ಟೆಲ್ಲ ಆಕರಗಳನ್ನು ಒಟ್ಟು ಮಾಡಬೇಕಾಗು ತ್ತದೆ, ಅವುಗಳನ್ನು ವಿಮರ್ಶಿಸಬೇಕಾಗುತ್ತದೆ–ಎಂಬು ವದನ್ನು ಕೂಡಾ ಸ್ಪಷ್ಟವಾಗಿ ಅರಿತಿದ್ದರು. ಕಾಶ್ಮೀರದ ಕಲ್ಹಣನು ತನ್ನ ಕೃತಿ 'ರಾಜತರಂಗಿಣಿ' (ಕ್ರಿ.ಶ. ೧೧೬೮) ಯಲ್ಲಿ,

ದೃಷ್ಟಂ ದೃಷ್ಟಂ ನೃಪೋದಂತಂ ಬಧ್ವಾ
ಪ್ರಮಯಮೀಯುಷಾಂ
ಅರ್ವಾಕ್ಕಾಲಭವೈರ್ವಾರ್ತಾ ಯತ್ಪ್ರಬಂಧೇಷು
ಪೂರ್ಯತೆ ॥
ದಾಕ್ಷ್ಯಂ ಕಿಯದಿದಂ ತಸ್ಮಾದಸ್ಮಿನ್ ಭೂತಾ
ರ್ಥವರ್ಣನೆ ।
ಸರ್ವಪ್ರಕಾರಂ ಸ್ಖಲಿತೆ ಯೋಜನಾಯ
ಮಮೋದ್ಯಮಃ ॥

"ಪ್ರಾಚೀನ ವಿದ್ವಾಂಸರು ತಮ್ಮ ಕಾಲದಲ್ಲಿ ಪ್ರತ್ಯೇಕ ಕಂಡು ತಿಳಿದ ರಾಜರ ವಿಷಯಗಳ ಬಗ್ಗೆ ಗ್ರಂಥ ಗಳನ್ನು ಬರೆದ ಕಾಲಜ್ಞಾನಿಗಳು. ಅನಂತರದ ವಿದ್ವಾಂಸರು ಈ ಹಿಂದಿನ ರಾಜರುಗಳ ಬಗ್ಗೆ ಬರೆಯು ವಾಗ ಈ ಗ್ರಂಥಗಳಿಂದ ಸಂಗ್ರಹಿಸುವದಲ್ಲದೆ ಪ್ರಚಲಿತ ದಂತಕಥೆ, ಆಡುಮಾತುಗಳನ್ನು ಸೇರಿಸಿ ಬರೆದರು. ಹಾಗೆ ಮಾಡುವಾಗ, ವಿಚಕ್ಷಣತೆಯನ್ನು ಉಪಯೋಗಿ ಸಿಲ್ಲ, ವಿಮರ್ಶೆಯನ್ನು ಮಾಡಿಲ್ಲ. ಆದ್ದರಿಂದ ಈಗ ನನ್ನ ಗ್ರಂಥರಚನೆಯಲ್ಲಿ ಇಂಥ ತಪ್ಪುಗಳನ್ನೆಲ್ಲ ತೆಗೆದು ಲಭ್ಯವಿರುವ ಹಿಂದಿನ ಮಹತ್ವದ ಪತ್ರಗಳನ್ನು, ದಾನ ಪತ್ರಗಳನ್ನು, ಶಾಸನಗಳನ್ನು ಪರಿಶೀಲಿಸಿ ಇವುಗಳ ಆಧಾರದ ಮೇಲೆ ವಿರೋಧಾಭಾಸಗಳನ್ನು ಬಗೆಹರಿಸಿ ಇತಿಹಾಸವನ್ನು ಬರೆಯುವ ಪ್ರಯತ್ನ ಮಾಡಿದ್ದೇನೆ" ಎಂದು ತನ್ನ ಕ್ರಮ ವಿಧಾನಗಳ ಬಗ್ಗೆ ಹೇಳಿದ್ದಾನೆ.

ಕಲ್ಹಣನು ಹೇಳಿದಂತೆ, ನಮ್ಮ ದೇಶದ ಉದ್ದಗ ಲಕ್ಕೂ ಹಾಗೂ ಸುಮಾರು ೫೦೦೦ ವರ್ಷಗಳ ಉದ್ದಕ್ಕೂ ವಿಪುಲ ಗ್ರಂಥಗಳಲ್ಲದೆ ನಾನಾ ಪ್ರಕಾರದ ಪ್ರಾಚ್ಯವಸ್ತು ಗಳು ಅಂದರೆ ವಿವಿಧ ಶಾಸನಗಳು, ಸ್ಮಾರಕಗಳು, ಮೂರ್ತಿಗಳು, ನೆಲೆಗಳು ಮೊದಲಾದವು ಹೇರಳವಾಗಿವೆ. ಸುಮಾರು ೧೮ನೇ ಶತಮಾನದ ಮಧ್ಯಭಾಗದಿಂದ ಹೆಚ್ಚಾಗಿ ಭಾರತೀಯ ಇತಿಹಾಸ ಮತ್ತು ಸಂಸ್ಕೃತಿಯಲ್ಲಿ ಆಸ್ಥೆ ತಳೆದ ಬ್ರಿಟಿಷ್ ಅಧಿಕಾರಿಗಳು ಹಾಗೂ ಭಾರತೀಯ ವಿದ್ವಾಂಸರು ನಮ್ಮ ದೇಶದ ಪ್ರಾಚೀನ ಸಾಹಿತ್ಯ ಮತ್ತು ಪ್ರಾಚ್ಯವಸ್ತು ಶೋಧನೆ ಮತ್ತು ಅಧ್ಯಯನ ವನ್ನು ನಡೆಸುತ್ತಾ ಬಂದರು. ಸುಮಾರು ೧೯೪೭ ರಿಂದ ಇಂಥ ಶೋಧನೆಗಳು ಮತ್ತು ಅಧ್ಯಯನವು ತೀವ್ರವಾಗಿ ವ್ಯಾಪಕವಾಗುತ್ತಾ ಅನೇಕ ಪಟ್ಟು ಹೆಚ್ಚಾಗಿದೆ. ಅಷ್ಟಾಗಿ ಗಮನಕೊಡದಂಥ ಜನಪದಸಾಹಿತ್ಯ, ಸ್ಥಳನಾಮ, ಸ್ಥಳೀಯ ಪುರಾಣ ಮೊದಲಾದ ಹಲವಾರು ವಿಷಯಗಳ ಲ್ಲಿಯ ಐತಿಹಾಸಿಕ ಅಂಶಗಳನ್ನು ವೈಜ್ಞಾನಿಕ ವಿಧಾನ ಗಳಿಂದ ವಿಮರ್ಶೆ ಮಾಡಿ ಪ್ರಮಾಣಬದ್ಧ, ಪ್ರಾಮಾಣಿಕ, ನಿಷ್ಪಕ್ಷಪಾತ ಸಮಗ್ರ ಇತಿಹಾಸದ ಪುನರ್ರಚನೆಯ ಪ್ರಯತ್ನ ನಡೆದಿದೆ. ಇದು ಸಂತೋಷದ ಸಂಗತಿ. ಕೇಂದ್ರ ಹಾಗೂ ಪ್ರತಿಯೊಂದು ಪ್ರಾದೇಶಿಕ ಸರ್ಕಾರಗಳ ಪ್ರಾಚ್ಯವಸ್ತು ಇಲಾಖೆಗಳಲ್ಲದೆ, ಬಹುಮಟ್ಟಿಗೆ ಎಲ್ಲಾ ವಿಶ್ವವಿದ್ಯಾಲಯಗಳೂ ಅನೇಕ ಸಂಶೋಧನಾ ಸಂಸ್ಥೆ ಗಳೂ ಸ್ವತಂತ್ರವಾಗಿ ಅನೇಕ ವಿದ್ವಾಂಸರುಗಳೂ ಈ

ಮಹಾನ್‌ಕಾರ್ಯವನ್ನು ನಡೆಸುತ್ತಿದ್ದಾರೆ. ದಿನೇ ದಿನೇ ಸಂಶೋಧನೆ ಪ್ರಮಾಣ ಹೆಚ್ಚುತ್ತಿದೆ. ಆದರೂ ಇದುವರೆಗಿನ ಶೋಧನೆಗಳಿಂದ ಒಂದು ಸತ್ಯ ಸ್ಪಷ್ಟವಾಗುತ್ತಿದೆ. ಅದೇನೆಂದರೆ, ಈ ಕ್ಷೇತ್ರದಲ್ಲಿ ಇದುವರೆಗೆ ಆಗಿರುವ ಕೆಲಸ ಹಾಗೂ ಇನ್ನು ಮುಂದೆ ಆಗಬೇಕಾದ ಕೆಲಸದ ಪ್ರಮಾಣವು ಪಕ್ಷಿನೋಟದಿಂದಲೂ ಅಜಗಜಾಂತರ. ಈ ದೃಷ್ಟಿಯಿಂದ ನಿಷ್ಠಾವಂತ ಸಂಶೋಧಕರ, ಉತ್ತಮ ಮಟ್ಟದ ಸಂಸ್ಥೆಗಳ ಸಂಖ್ಯೆ ಬಹಳ ಕಡಿಮೆಯೆಂದೇ ಹೇಳಬೇಕು. ಉದಾಹರಣೆಗೆ ನಮ್ಮ ಗದಗ–ಡಂಬಳ–ಮುಳಗುಂದ ಪ್ರದೇಶದಲ್ಲಿ ಅವೆಷ್ಟು ಶಾಸನಗಳು, ವಿವಿಧ ಪ್ರಕಾರದ ವಾಸ್ತುಶಿಲ್ಪ ಶೈಲಿಯ ದೇವಾಲಯಗಳು, ಮೂರ್ತಿಗಳು ಮೊದಲಾದ ಪ್ರಾಚ್ಯವಸ್ತುಗಳು ವಿಪುಲವಾಗಿವೆ. ಇವುಗಳ ಬಗ್ಗೆ ಎಚ್. ಕಸೆನ್ಸ್‌ನ **'ಚಾಲುಕ್ಯನ್ ಆರ್ಕಿಟೆಕ್ಚರ್'** ಎಂಬ ಗ್ರಂಥದಲ್ಲಿ ಈ ಭಾಗದ ಹಲವು ದೇವಾಲಯಗಳ ಒಂದೆರಡು ಚಿತ್ರಗಳು, ಟಿಪ್ಪಣಿಗಳು ಹಾಗೂ ಕೆಲವು ಸಂಶೋಧನಾ ಲೇಖನಗಳು ಮಾತ್ರ ಇವೆ. ಇವೆಲ್ಲವನ್ನು ಸೇರಿಸಿದರೂ ಅದು ತೀರ ಅಲ್ಪ ಪ್ರಮಾಣದ್ದು. ಬೃಹತ್ ಪ್ರಮಾಣದ ಈ ವಿವಿಧ ಪ್ರಾಚ್ಯವಸ್ತುಗಳ ಕೂಲಂಕಷ ಸಮಗ್ರ ಅಧ್ಯಯನವು ಇನ್ನೂ ಆಗಬೇಕಾಗಿದೆ. ಗದಗ ಪ್ರದೇಶದ ಅನತಿ ದೂರದಲ್ಲೇ ರೋಣ–ಸೂಡಿ-ನರೇಗಲ್ಲ ಪ್ರದೇಶದಲ್ಲಿಯೂ ಇಂಥ ಸಾಂಸ್ಕೃತಿಕ ಅವಶೇಷಗಳು ಬಹಳ ಇವೆ ಎಂದು ನಮಗೆ ತಿಳಿದುಬಂದಿದೆ. ಇದರಂತೆಯೇ ಲಕ್ಷ್ಮೇಶ್ವರ–ಕುಕ್ಕನೂರು–ಇಟಗಿ ಪ್ರದೇಶಗಳು. ಹೀಗೆ ಒಂದೇ ಎರಡೇ. ಕರ್ನಾಟಕದಲ್ಲಿ ವಿವಿಧ ಭಾಗಗಳಲ್ಲಿ ಸೇರಿದಂತೆ ಇಂಥ ಸಾಂಸ್ಕೃತಿಕ ಕೇಂದ್ರಗಳು ನೂರಾರು ಇವೆ. ಇವುಗಳ ವ್ಯವಸ್ಥಿತ ಸಮಗ್ರ ಅಧ್ಯಯನ ಆಗಿದೆಯೇ ? ಈಗ ಈ ಪ್ರಶ್ನೆಗೆ ಬಹುಮಟ್ಟಿಗೆ ಉತ್ತರ ಮೌನವೆಂದೇ ತೋರುವದು. ಇವೆಲ್ಲವನ್ನು ಗಮನಿಸಿದಾಗ ಈ ಮಹತ್ ಮತ್ತು ಬೃಹತ್ ಕಾರ್ಯವನ್ನು ಮಾಡಲು ಇನ್ನೂ ಅದೆಷ್ಟು ನಿಷ್ಠಾವಂತ ಉತ್ತಮ ಸಂಶೋಧಕರು ಕಟಿಬದ್ಧರಾಗಬೇಕಾಗಿದೆ ; ಸಂಸ್ಥೆಗಳು ಮುಂದೆ ಬರಬೇಕಾಗಿದೆ.

ಹಿಂದೆ, ಮೌಲ್ಯ ಆಧಾರಿತ ಕೆಲವು ಐತಿಹಾಸಿಕ ವಿಷಯಗಳನ್ನು ನೃತ್ಯ, ನಾಟಕ, ಕಥೆ, ಕಾವ್ಯ ಮೊದಲಾದವುಗಳಿಂದ ತಿಳಿಸಿ ಜನಸಾಮಾನ್ಯರಲ್ಲಿ ತಿಳುವಳಿಕೆ ವಿವೇಕವನ್ನು ಮೂಡಿಸುವ ನಿರಂತರ ಪ್ರಯತ್ನ ನಡೆಯುತ್ತಿತ್ತು. ಈ ಕ್ರಮ ಸಮಾಜದ ಮೇಲೆ ಒಳ್ಳೆಯ ಪರಿಣಾಮವನ್ನು ಬೀರಿತೆಂದೆ ಹೇಳಬಹುದು. ಶಿವಾಜಿ, ಮಹಾತ್ಮಾಗಾಂಧಿ, ವಿಶ್ವೇಶ್ವರಯ್ಯರಂಥವರು ರಾಷ್ಟ್ರದ ಹಲವಾರು ರೀತಿಯ ಏಳಿಗೆಗೆ ಕಾರಣರಾಗುವಂಥ ವ್ಯಕ್ತಿಗಳಾಗುವಂತೆ ಮಾಡಿತು. ಆ ರೀತಿಯ ಇತಿಹಾಸ ನಿರೂಪಣೆ ಅಂದಿನ ಕ್ರಮ.

ಈಗ ಜನಸಾಮಾನ್ಯರು ಕೂಡಾ ಹೆಚ್ಚು ಹೆಚ್ಚು ವಿಚಾರಶೀಲರಾಗುತ್ತಿದ್ದಾರೆ, ಪ್ರಜ್ಞಾವಂತರಾಗುತ್ತಿದ್ದಾರೆ, ಕುತೂಹಲಶಾಲಿಗಳಾಗುತ್ತಿದ್ದಾರೆ. ಆದ್ದರಿಂದ ಇತಿಹಾಸ ನಿರೂಪಣೆಯು ಹೆಚ್ಚು ಹೆಚ್ಚು ವೈಜ್ಞಾನಿಕವಾಗಬೇಕಾಗುತ್ತದೆ. ಇದರಲ್ಲಿ ಮಾನವನೇ ಕೇಂದ್ರಬಿಂದು. ವಿವಿಧ ಕ್ಷೇತ್ರಗಳಲ್ಲಿಯ ಅವನ ಪ್ರಗತಿ ಸಾಧನೆಯಲ್ಲಿ ಕಾರಣಬದ್ಧವಾದ ಸೋಲು-ಗೆಲುವು, ಸಾಧಕ-ಬಾಧಕಗಳು ಇಂದಿನ ಜೀವನಕ್ಕೆ, ಮುಂದಿನ ಪ್ರಗತಿಗೆ ಎಷ್ಟರಮಟ್ಟಿಗೆ ಇವು ಸಮಯೋಚಿತ. ಹೀಗೆ ಹಲವಾರು ರೀತಿಯಿಂದ ನಿಷ್ಪಕ್ಷಪಾತವಾಗಿ ವಿಮರ್ಶಿಸಬೇಕಾಗಿದೆ. ಇಂಥ ಸತ್ಯ, ಅರ್ಥಪೂರ್ಣ ಇತಿಹಾಸ ಜನಸಾಮಾನ್ಯರಿಗೂ ಮುಟ್ಟಬೇಕಾಗಿದೆ.

ಹಾಗೆಯೇ, ನಮ್ಮ ದೇಶದಲ್ಲಿ ಅಭಿಮಾನಶೂನ್ಯರಿಗೇನು ಕಡಿಮೆ ಇಲ್ಲ. ಇತಿಹಾಸದ ಬಗ್ಗೆ ನಿರುತ್ಸಾಹ, ಜಿಗುಪ್ಸೆ, ಐತಿಹಾಸಿಕ ಕಾರಣಗಳಿಂದ ತಪ್ಪು ತಿಳುವಳಿಕೆ ಮೊದಲಾದವು ಗಣನೀಯವಾಗಿ ಇವೆ. ನಮ್ಮ ದೇಶ ಬಲಾಢ್ಯವಾಗಬೇಕಾದರೆ ಇವೆಲ್ಲವನ್ನು ಸರಿಯಾದ ಇತಿಹಾಸದ ಮಾಹಿತಿಯಿಂದ, ಉದಾಹರಣೆಗಳಿಂದ ನಿರ್ಮೂಲ ಮಾಡಿ ಜನರಲ್ಲಿ ಸ್ಫೂರ್ತಿಯನ್ನು, ಅಭಿಮಾನವನ್ನು ಮೂಡಿಸಬೇಕಾಗಿದೆ. ಆದ್ದರಿಂದ ಇಂದು ಒಳ್ಳೆಯ ಸಮಾಜನಿರ್ಮಾಣಕಾರ್ಯದಲ್ಲಿ ಇತಿಹಾಸಕಾರನ ಪಾತ್ರ ದೊಡ್ಡದಿದೆ.

ಈ ಹಿನ್ನೆಲೆಯಲ್ಲಿ ಮೂರು ವರ್ಷಗಳ ಹಿಂದೆ ಇತಿಹಾಸದಲ್ಲಿ ಆಸ್ಥೆವುಳ್ಳ ಜನರು ಹಾಗೂ ಉತ್ತಮ ಸಂಶೋಧಕರು ಸೇರಿ ಈ ಮಹಾತ್ಕಾರ್ಯದಲ್ಲಿ ಭಾಗವಹಿಸಲು **ಕರ್ನಾಟಕ ಇತಿಹಾಸ ಅಕಾದೆಮಿ** ಎಂಬ ಒಂದು ಸಂಸ್ಥೆಯನ್ನು ಮಾಡಿಕೊಂಡು ಒಳ್ಳೆಯ ರೀತಿಯಲ್ಲಿ

ಕೆಲಸ ಮಾಡುತ್ತಿದ್ದಾರೆ. ಕೇವಲ ವಿಶ್ವವಿದ್ಯಾಲಯ, ಕಾಲೇಜುಗಳಲ್ಲಿ ಬೋಧಿಸುವ ಇತಿಹಾಸ ಶಿಕ್ಷಕರನ್ನು ಮಾತ್ರವಲ್ಲದೆ, ಇತಿಹಾಸದಲ್ಲಿ ಆಸಕ್ತಿವುಳ್ಳ ಯಾವದೇ ವ್ಯಕ್ತಿಯು ಕೂಡಾ ಈ ಸಂಸ್ಥೆಯ ಕಾರ್ಯಗಳಲ್ಲಿ ಭಾಗ ವಹಿಸುವುದಕ್ಕೆ ಅವಕಾಶ ಇರುವುದು ನಿಜವಾಗಿಯೂ ಪ್ರಶಂಸನೀಯ. ಕೇವಲ ವಾರ್ಷಿಕ ಸಮ್ಮೇಳನದ ಚಟು ವಟಿಕೆಗೆ ಸೀಮಿತವಾಗಿರದೆ, ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಹೆಚ್ಚು ಪರಿಚಯ ಇಲ್ಲದ ಇತಿಹಾಸದ ವಿಷಯಗಳ ಮೇಲೆ ವಿಚಾರ ಸಂಕಿರಣಗಳನ್ನು ಏರ್ಪಡಿ ಸುವುದು, ಕರ್ನಾಟಕ ಇತಿಹಾಸದ ಬಗ್ಗೆ ಹೆಚ್ಚು ಆಸಕ್ತಿ ಯನ್ನುಂಟುಮಾಡಲು ಆಕರ್ಷಕ ಬಹುಮಾನಗಳೊಡನೆ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ನಡೆಸುವುದು ಮೊದಲಾದ ಚಟುವಟಿಕೆಗಳು ತುಲನಾತ್ಮಕವಾಗಿ ಈ ಅಕಾದೆಮಿಯ ವಿಶೇಷತೆಯೆಂದು ತೋರುವುದು. ಆದ್ದರಿಂದ ಈ ಅಕಾದೆಮಿಯು ಈ ವರ್ಷ ಐತಿಹಾಸಿಕ ಸ್ಥಳವಾದ ಗದಗಿ ನಲ್ಲಿ ಸಮ್ಮೇಳನವನ್ನು ನಡೆಸುತ್ತಿರುವುದು ನಮ್ಮೆಲ್ಲರಿಗೂ ಈ ನಗರದ ಜನರೆಲ್ಲರಿಗೂ ಹೆಮ್ಮೆಯನ್ನು ತಂದಿದೆ ಹಾಗೂ ಸಂತೋಷವನ್ನುಂಟು ಮಾಡಿದೆ. ಮೇಲಾಗಿ, ಗದಗ ಪ್ರದೇಶದ ಮೇಲೆ ವಿಶೇಷ ಗೋಷ್ಠಿಯೊಂದನ್ನು ಏರ್ಪಡಿಸಿರುವುದು ಉಚಿತವಷ್ಟೆ ಅಲ್ಲ, ಜ್ಞಾನಲಾಭವೂ ಹೌದು. ಇದರಿಂದ ಈ ಭಾಗದ, ಮುಖ್ಯವಾಗಿ ಶಾಲಾ ಕಾಲೇಜುಗಳ ಇತಿಹಾಸ ಶಿಕ್ಷಕರಲ್ಲಿ ಕುತೂಹಲವನ್ನು ಕೆರಳಿಸಿ, ಸ್ಫೂರ್ತಿಯನ್ನು ಒದಗಿಸಿ, ತಿಳುವಳಿಕೆಯನ್ನು ಹೆಚ್ಚಿಸಿ ಅವರು ಈ ಭಾಗದ ಇತಿಹಾಸ, ಸಂಸ್ಕೃತಿಗೆ ಸಂಬಂಧಿಸಿದ ಎಲ್ಲಾ ಆಕರಗಳನ್ನು ಶೋಧಿಸಿ ಅಭ್ಯಸಿಸು ವುದರಲ್ಲಿ ತೊಡಗುವಂತೆ ಮಾಡಬಹುದೆಂದು ನಮ್ಮ ಆಶಯ. ಕರ್ನಾಟಕ ಇತಿಹಾಸದ ಪುನರ್ರಚನೆಯಲ್ಲಿ ಇವರು ವಿಶಿಷ್ಟ ಪಾಲನ್ನು ಕೊಟ್ಟು ತಮ್ಮ ಕರ್ತವ್ಯಗಳನ್ನು ನೆರವೇರಿಸುವರೆಂದು ಆಶಿಸುವೆವು.